

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 592 (724) |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 05.03.2021. |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಜವಳಿ ಇಲಾಖೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನಿಗಮಗಳ ಸಂಖ್ಯೆ ಎಷ್ಟು; ಸದರಿ ನಿಗಮಗಳಿಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರದಿಂದ ಯಾವ ರೀತಿಯ ಅನುದಾನ ನೀಡಲಾಗುತ್ತಿದೆ; (ಅಂಕಿ ಅಂಶ ಒದಗಿಸುವುದು).</td><td>
ಕೈಮಗ್ಗ ಮತ್ತು ಜವಳಿ ಇಲಾಖೆಯಡಿಯಲ್ಲಿ ಒಟ್ಟು 2 ನಿಗಮಗಳು ಕಾರ್ಯನಿರ್ವಹಿಸುತ್ತಿದ್ದು, ವಿವರಗಳು ಇಂತಿವೆ:-<br>
1. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ (ಕೆ.ಹೆಚ್.ಡಿ.ಸಿ.), ಹುಬ್ಬಳ್ಳಿ<br>
2. ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ, (ಕೆ.ಎಸ್.ಟಿ.ಐ.ಡಿ.ಸಿ), ಬೆಳಗಾವಿ<br><br>
1. ಕೆ.ಹೆಚ್.ಡಿ.ಸಿ:-<br>
ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ನೇಕಾರರಿಗೆ ಸರಬರಾಜು ಮಾಡುವ ಕಚ್ಚಾ ನೂಲು ಖರೀದಿಗಾಗಿ ಪ್ರೋತ್ಸಾಹಧನ, ನಿಗಮವು ಬ್ಯಾಂಕುಗಳಿಂದ ಪಡೆಯುವ ಸಾಲಕ್ಕೆ ಬಡ್ಡಿ ರಿಯಾಯಿತಿ ಹಾಗೂ ನೇಕಾರರಿಂದ ತಯಾರಾಗುವ ಬಟ್ಟೆ ಮಾರಾಟದ ಮೇಲೆ ಶೇ.20 ರಷ್ಟು ಸಹಾಯಧನವನ್ನು ಸರ್ಕಾರವು ಪ್ರತಿ ವರ್ಷ ನೇಕಾರರ ಪ್ಯಾಕೇಜ್ ಯೋಜನೆಯಡಿ ಅನುದಾನವನ್ನು ಒದಗಿಸುತ್ತಿದ್ದು, ಕೇಂದ್ರ ಸರ್ಕಾರದಿಂದ ಯಾವುದೇ ಅನುದಾನ ಒದಗಿಸುತ್ತಿಲ್ಲ.<br><br>
2020-21ನೇ ಸಾಲಿನಲ್ಲಿ ಈವರೆಗೆ ಬಿಡುಗಡೆಯಾಗಿರುವ ಅನುದಾನದ ವಿವರಗಳು ಈ ಕೆಳಗಿನಂತಿವೆ:-<br>
(ರೂ.ಲಕ್ಷಗಳಲ್ಲಿ)
<table>
<tr><th>ಲೆಕ್ಕಶೀರ್ಷಿಕೆ: ನೇಕಾರರ ವಿಶೇಷ ಪ್ಯಾಕೇಜ್ – ಕೆ.ಹೆಚ್.ಡಿ.ಸಿ</th><th>ಹಂಚಿಕೆಯಾದ ಅನುದಾನ</th><th>ಬಿಡುಗಡೆಯಾದ ಅನುದಾನ</th></tr>
<tr><td>ಸಹಾಯಧನ– 2851–00–103–0–69–106</td><td>1133.00</td><td>1133.00</td></tr>
<tr><td>ವಿಶೇಷ ಘಟಕ ಯೋಜನೆ– 2851–00–103–0–69–422</td><td>260.00</td><td>260.00</td></tr>
<tr><td>ಗಿರಿಜನ ಉಪ ಯೋಜನೆ– 2851–00–103–0–69–423</td><td>107.00</td><td>107.00</td></tr>
<tr><td>ಒಟ್ಟು ಮೊತ್ತ</td><td>1500.00</td><td>1500.00</td></tr>
</table>
2. ಕೆ.ಎಸ್.ಟಿ.ಐ.ಡಿ.ಸಿ:-<br>
ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮಕ್ಕೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಂದ ಪ್ರತಿ ವರ್ಷ ನಿಯಮಿತವಾಗಿ ಯಾವುದೇ ಅನುದಾನವನ್ನು ಒದಗಿಸುತ್ತಿಲ್ಲ.<br><br>
ಕೇಂದ್ರ ಪುರಸ್ಕೃತ ಯೋಜನೆಗಳಡಿಯಲ್ಲಿ ನಿಗಮವು ಅನುಷ್ಠಾನ ಗೊಳಿಸುವ ಕಾರ್ಯಕ್ರಮಗಳಿಗೆ ಸೀಮಿತವಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನುದಾನ ಒದಗಿಸುತ್ತವೆ.
</td></tr>
</table>

...2

| | | |
|---|---|---|
| | | ರಾಜ್ಯ ಸರ್ಕಾರದ ಯೋಜನೆಗಳಡಿ ನಿಗಮವು ಕೈಗೊಳ್ಳುವ ನಿಗದಿತ ಕಾರ್ಯಕ್ರಮಗಳಿಗೆ ರಾಜ್ಯ ಸರ್ಕಾರವು ಅನುದಾನ ಒದಗಿಸುತ್ತದೆ. ಸದರಿ ನಿಗಮಕ್ಕೆ ಆಡಳಿತಾತ್ಮಕ ವೆಚ್ಚಗಳಿಗಾಗಿ ವಾರ್ಷಿಕ ರೂ.100.00 ಲಕ್ಷಗಳನ್ನು ಎರಡು ವರ್ಷಗಳ ಹಿಂದೆ ಅಂದರೆ 2017–18ರಲ್ಲಿ ಮಾತ್ರ ಒದಗಿಸಲಾಗಿದೆ. |
| (ಆ) | ಕೈಮಗ್ಗ ಹಾಗೂ ವಿದ್ಯುತ್ ಮಗ್ಗದಿಂದ ನೇಯ್ದ ಬಟ್ಟೆಗಳನ್ನು ಯಾವ ರೀತಿಯಲ್ಲಿ ವಿಲೇವಾರಿ ಮಾಡಲಾಗುತ್ತಿದೆ; | 1) **ಕೆ.ಹೆಚ್.ಡಿ.ಸಿ:-**<br>ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ವ್ಯಾಪ್ತಿಯಲ್ಲಿ ಬರುವ ನೋಂದಾಯಿತ ನೇಕಾರರು, ಕೈಮಗ್ಗಗಳನ್ನು ಬಳಸಿ ನೇಯ್ಗೆ ಮಾಡುವ ಬಟ್ಟೆಗಳನ್ನು ವಿದ್ಯಾ ವಿಕಾಸ ಯೋಜನೆ ಅಡಿಯಲ್ಲಿ ವಿದ್ಯಾರ್ಥಿಗಳಿಗೆ ಸಮವಸ್ತ್ರ ನೀಡಲು ಶಿಕ್ಷಣ ಇಲಾಖೆಗೆ ಪೂರೈಸಲಾಗುತ್ತಿದೆ. ಇದೇ ರೀತಿ ರೇಷ್ಮೆ ನೂಲು ಬಳಸಿ ನೇಯ್ಗೆ ಮಾಡುವ ಸೀರೆ ಹಾಗೂ ಇತರೆ ಬಟ್ಟೆಗಳನ್ನು ನಿಗಮದ ಪ್ರಿಯದರ್ಶಿನಿ ಮಾರಾಟ ಮಳಿಗೆಗಳಲ್ಲಿ ಮಾರಾಟ ಮಾಡಲಾಗುತ್ತಿದೆ.<br>2) **ಕೆ.ಎಸ್.ಟಿ.ಐ.ಡಿ.ಸಿ:-**<br>ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮದ ವ್ಯಾಪ್ತಿಯಲ್ಲಿ ವಿದ್ಯುತ್ ಮಗ್ಗಗಳು ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಬಹುತೇಕ ಮಗ್ಗಗಳಲ್ಲಿ ಪಾಲಿಸ್ಟರ್ ಸೀರೆಗಳನ್ನು ಉತ್ಪಾದನೆ ಮಾಡಲಾಗುತ್ತಿದ್ದು ಸ್ಥಳೀಯ ಮಾರುಕಟ್ಟೆಯಲ್ಲಿ ಅವುಗಳ ವಿಲೇವಾರಿ ಮಾಡಲಾಗುತ್ತಿದೆ.<br>ಶಿಕ್ಷಣ ಇಲಾಖೆಯ ಮೂಲಕ ವಿದ್ಯಾ ವಿಕಾಸ ಯೋಜನೆಯಡಿ ಸರ್ಕಾರಿ ಶಾಲಾ ಮಕ್ಕಳಿಗೆ ಪೂರೈಸಲಾಗುತ್ತಿರುವ ಸಮವಸ್ತ್ರ ಬಟ್ಟೆಯನ್ನು ನಿಗಮದ ವತಿಯಿಂದ ಕಳೆದ 20 ವರ್ಷಗಳಿಂದ ಸರಬರಾಜು ಮಾಡಲಾಗುತ್ತದೆ. |
| (ಇ) | ಉತ್ಪಾದನೆ ಹಾಗೂ ಬೇಡಿಕೆಗಳ ಅಂತರ ಯಾವ ರೀತಿಯಲ್ಲಿದೆ: ಇದರ ಪರಿಣಾಮವಾಗಿ ರಾಜ್ಯದ ನೇಕಾರರ ಸಮಸ್ಯೆಗೆ ಸರ್ಕಾರ ಯಾವ ರೀತಿಯಲ್ಲಿ ಪರಿಹಾರ ಒದಗಿಸುತ್ತಿದೆ? | **ಕೆ.ಹೆಚ್.ಡಿ.ಸಿ:-**<br>ಇತ್ತೀಚಿನ ದಿನಗಳಲ್ಲಿ ತಾಂತ್ರಿಕತೆಯ ಬಳಕೆಯಿಂದ ವಿಭಿನ್ನ ವಿನ್ಯಾಸ ಗಳನ್ನು ಹೊಂದಿರುವ ಸೀರೆ ಹಾಗೂ ಇತರೆ ಜವಳಿ ವಸ್ತ್ರಗಳು ಮಾರುಕಟ್ಟೆಯಲ್ಲಿ ಕಡಿಮೆ ದರದಲ್ಲಿ ಲಭ್ಯವಿರುವ ಕಾರಣ ಕೈಮಗ್ಗದ ಸೀರೆ ಹಾಗೂ ಜವಳಿ ವಸ್ತುಗಳಿಗೆ ಬೇಡಿಕೆ ಕಡಿಮೆಯಾಗಿದೆ. ಅಲ್ಲದೆ ಕೈಮಗ್ಗ ಉತ್ಪನ್ನಗಳು ದುಬಾರಿಯಾಗಿರುವ ಕಾರಣ, ಜನ ಸಾಮಾನ್ಯರು ಕಡಿಮೆ ದರದಲ್ಲಿ ದೊರೆಯುವ ಪವರ್ ಮಿಲ್ ನಿಂದ ತಯಾರಾಗುವ ಉತ್ಪನ್ನಗಳನ್ನು ಖರೀದಿಸುತ್ತಿದ್ದಾರೆ. ಇದರಿಂದ ಕೈಮಗ್ಗದ ಸೀರೆಗಳು ಹಾಗೂ ಇತರೆ ವಸ್ತುಗಳ ಬೇಡಿಕೆ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ.<br>ಮೇಲಿನ ಕಂಡಿಕೆ (ಅ)ರಲ್ಲಿ ತಿಳಿಸಿರುವಂತೆ ಸಹಾಯಧನವನ್ನು ನಿಗಮಕ್ಕೆ ಸರ್ಕಾರವು ಒದಗಿಸುತ್ತಿರುತ್ತದೆ. ಇದರಿಂದ ನೇಕಾರರಿಗೆ ಉದ್ಯೋಗ ನೀಡಲು ಸಹಕಾರಿಯಾಗುತ್ತದೆ.<br>**ಕೆ.ಎಸ್.ಟಿ.ಐ.ಡಿ.ಸಿ:-**<br>ಕೆ.ಎಸ್.ಟಿ.ಐ.ಡಿ.ಸಿ ನಿಗಮವು ಜವಳಿ ಕ್ಷೇತ್ರದ ಮೂಲಭೂತ ಸೌಲಭ್ಯ ಅಭಿವೃದ್ಧಿಯ ಉದ್ದೇಶ ಹೊಂದಿರುತ್ತದೆ, ಆದಾಗ್ಯೂ ಶಿಕ್ಷಣ ಇಲಾಖೆಯ ವಿದ್ಯಾ ವಿಕಾಸ ಯೋಜನೆಯಡಿ ಸರಬರಾಜು ಆದೇಶವನ್ನು ಪಡೆದು ಸಮವಸ್ತ್ರ ಬಟ್ಟೆಯನ್ನು ಸರಬರಾಜು ಮಾಡಲಾಗಿದೆ. |

ಸಂ: CI 34 JAKE 2021

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು